ಗಲೀನ ಲೇಬೆದೆವ



# ಮಾಷಳ ಹಾಸಿಗೆ



ರಾದುಗ ಪ್ರಕಾಶನ
ಮಾಸ್ಕೋ

ಮಾಷಳ ತಾಯಿ ಎಂದಿನಂತೆ ಮಗಳನ್ನು ಹಾಸಿಗೆಯ ಮೇಲೆ ಮಲಗಿಸಿ ದೀಪ ಆರಿಸಿ ನೆರೆಮನೆಯಾಕೆಯನ್ನು ಕಾಣಲು ಹೋದಳು.

ಮಾಷ ಹಾಸಿಗೆಯ ಮೇಲೆ ಮಲಗಿದವಳೇ ಹೊರಳಾಡಲು ಶುರುಮಾಡಿದಳು. ಮಗ್ಗಲು ಬದಲಾಯಿಸಿದಳು. ಏನು ಮಾಡಿದರೂ ನಿದ್ರೆಯೇ ಬರದು. ಅವಳಿಗೆ ಒಂದು ಬಾರಿ ಹಾಸಿಗೆ ಒರಟು ಅನಿಸಿದರೆ ಇನ್ನೊಂದು ಬಾರಿ ದಿಂಬು ಎತ್ತರ ಅನಿಸಿತು. ಮತ್ತೊಂದು ಬಾರಿ ದಿಂಬು ತಗ್ಗು ಅನಿಸಿತು. ಅವಳಿಗೆ ಕೋಪ ಬಂತು. ದಿಂಬನ್ನು ನುಲಿಚುತ್ತ, "ನೀನೆಷ್ಟು ಒರಟು ! ಬೊಜ್ಜು ! ಸುಮ್ಮನೆ ಉಬ್ಬಿಕೊಂಡಿದೀಯ !" ಅಂತ ಬಯ್ದಳು.

ಅದನ್ನು ಕಾಲಿನಿಂದ ಚೆನ್ನಾಗಿ ತುಳಿದಳು. ಆಮೇಲೆ ಅವಳಿಗೆ ಕಂಬಳಿಯ ಮೇಲೆ ಕೋಪ ಬಂತು.

"ಹೋಗು ! ನೀನು ಭಾರವಾಗಿದೀಯ, ಚುಚ್ಚುತ್ತೀಯ !" ಅಂತ ಅದನ್ನು ನೆಲದ ಮೇಲೆ ಬಿಸಾಡಿದಳು. ಮಂಚದಿಂದಿಳಿದು ಕಾಲಿನಿಂದ ನೆಲವನ್ನೊಮ್ಮೆ ಸಿಟ್ಟಿನಿಂದ ಕುಟ್ಟಿದಳು:

"ಈ ಹಾಸಿಗೆ ನನ್ನನ್ನು ಸಾಕುಮಾಡಿಬಿಡ್ತು ! ಮಲಗಿ ಮಲಗಿ ಬೇಜಾರಾಯ್ತು," ಅನ್ನುತ್ತಾ ಅವಳು ಚಪ್ಪಲಿ ಹಾಕಿಕೊಂಡು ಸದ್ದು ಮಾಡದೆ ತನ್ನ ಕೋಣೆಯಿಂದಾಚೆಗೆ ಬಂದಳು. ನೋಡುತ್ತಾಳೆ ! ಮನೆಬಾಗಿಲಿಗೆ ಬೀಗ ಹಾಕಿಲ್ಲ. ಸ್ವಲ್ಪ ಹೊತ್ತು ನಿಂತಳು. ಅನುಮಾನಿಸಿದಳು. ಆಕಡೆ ಈಕಡೆ ನೋಡಿದಳು. ಕಿವಿಗೊಟ್ಟು ಕೇಳಿದಳು.... ಯಾರೂ ಇಲ್ಲ ! ಮೆಲ್ಲನೆ ಮೆಟ್ಟಲು ಇಳಿದು ತೋಟಕ್ಕೆ ಹೋದಳು.



“ಆಹಾ! ಏನು ಸೊಗಸು. ಈ ಹೊತ್ತಿನಲ್ಲಿ ಯಾಕಪ್ಪ ನಿದ್ದೆ ಮಾಡಬೇಕು?” ಅನ್ನುತ್ತಾ ಮಾಷ ಒಂಟಿ ಕಾಲಿನಲ್ಲಿ ಕುಪ್ಪಳಿಸಿದಳು.

ತೋಟದ ಕಡೆಗೆ ಹೋಗುತ್ತಿದ್ದಾಗ ನಾಯಿಮರಿ ತ್ಯಾಫ್ಕ ಅವಳಿಗೆ ಅಡ್ಡ ಬಂತು.

“ಬೌ! ಬೌ! ಯಾರದು?” ಎಂದಿತು ತ್ಯಾಫ್ಕ.

“ನಾನು. ಮಾಷ.”

“ಯಾಕೆ ಇನ್ನೂ ಮಲಗಿಲ್ಲ? ಆಗಲೇ ಎಷ್ಟೊಂದು ಹೊತ್ತಾಗಿದೆ.”

“ನನ್ನ ಹಾಸಿಗೆ ಚೆನ್ನಾಗಿಲ್ಲ. ಮಲಗೋಕೆ ಆಗ್ತಿಲ್ಲ. ಅದರ ಮೇಲೆ ನಂಗೆ ಸಿಟ್ಟುಬಂತು. ಅದಕ್ಕೇ ಹೊರಟು ಬಂದೆ.”

“ಭೇಷ್! ಒಳ್ಳೇ ಕೆಲ್ಸ ಮಾಡ್ದೆ. ನಿನ್ನ ಹಾಸಿಗೆಗಿಂತ ನನ್ನ ಗೂಡಿನಲ್ಲಿ ಮಲಗೋದೆ ಚಂದ. ಗೋಣಿತಟ್ಟಿನ ಮೇಲೆ ಮುದುರಿಕೊಂಡು ಮಲಗಿದ್ರೆ ಎಂತೆಂಥ ಕನಸು ಬೀಳುತ್ತೆ ಗೊತ್ತಾ? ಸರಿ. ಬಾ, ಇಲ್ಲಿ ತೂರು.”

“ಆಹಾ! ಎಷ್ಟು ಚಂದ!” ಎಂದು ಮಾಷ ಹಿಗ್ಗಿದಳು.

ಮಂಡಿಯೂರಿ ಬಗ್ಗಿ ಅವಳು ನಾಯಿಮರಿಯ ಗೂಡಿನೊಳಕ್ಕೆ ತೂರಿದಳು. ಮುದುರಿಕೊಂಡು ಮಲಗಲು ಯತ್ನಿಸಿದಳು. ಆದರೆ ಸರಿಹೋಗಲಿಲ್ಲ. ಅಲ್ಲಿ ಒರಟಾಗಿತ್ತು, ಇಕ್ಕಟ್ಟಾಗಿತ್ತು. ಆಗ ನಾಯಿಮರಿ ತ್ಯಾಫ್ಕ ಮೂತಿಯನ್ನು ಗೂಡಿನೊಳಕ್ಕಿಟ್ಟಿತು. ಬಾಯಲ್ಲಿ ಮೂಳೆ ಕಚ್ಚಿಕೊಂಡಿತ್ತು.

“ನೋಡು. ನಿನಗೆ ಮೂಳೆಚೂರು ತಂದಿದ್ದೀನಿ. ಇದನ್ನು ಕಚ್ಚಿಕೊಂಡು ಮಲಗಿದರೆ ಚೆನ್ನಾಗಿ ನಿದ್ದೆ ಬರುತ್ತೆ.”

“ಬೇಡ. ಸಾಕಪ್ಪ. ನಿಂಗೆ ವಂದನೆಗಳು, ತ್ಯಾಫ್ಕ, ನಿನ್ನ ಮನೆಯೇನೋ ಚೆನ್ನಾಗಿದೆ. ಆದರೆ ಅದರಲ್ಲಿ ಮಲಗೋಕೆ ನನಗೆ ಇಷ್ಟವಿಲ್ಲ,” ಎಂದು ಹೇಳಿ ಮಾಷ ಗೂಡಿನಿಂದ ಹೊರಕ್ಕೆ ಬಂದಳು.

“ಆಹಾ! ನೀನು ಬಲೇ ಕಿರಿಕಿರಿ ಮಾಡ್ತೀಯ. ನಿಂಗೋ, ಎಲ್ಲವೂ ಹೇಳಿ ಮಾಡಿಸಿದ ಹಾಗಿರ್ಬೇಕು,” ಎಂದು ಗೊಣಗಿ ತ್ಯಾಫ್ಕ ತನ್ನ ಸಿಟ್ಟು ತೋರಿಸಿತು.





ತ್ಯಾಫ್ಕ ತನ್ನ ಪಾಡಿಗೆ ತಾನು ಗೂಡು ಸೇರಿತು. ಆಮೇಲೆ ಮಾಷ ತನಗಾಗಿ ಪಟ್ಟೆಕೋಳಿ ರಂಗುರಂಗಾದ ಮೊಟ್ಟೆ ಇಟ್ಟಿದೆಯೋ ಇಲ್ಲವೋ ನೋಡೋಣಾಂತ ಕೋಳಿಗೂಡಿನ ಕಡೆಗೆ ಓಡಿದಳು. ಅವಳು ಇನ್ನೂ ಕೋಳಿಗುಡಿಸಲಿನ ಒಳಕ್ಕೆ ಹೋಗೇ ಇಲ್ಲ ಆಗಲೇ ಹುಂಜ ಒಂದು ಸಾರಿ ಮೈಕೊಡವಿ ಕತ್ತನ್ನು ಎಲ್ಲ ಕಡೆಗೂ ಒಂದು ಸಾರಿ ತಿರುಗಿಸಿ ನೋಡಿತು.

"ನಿಂಗೇನು ಬೇಕು?" ಹುಂಜ ಪೇತ್ಕ ಗಂಭೀರವಾಗಿ ಕೇಳಿತು.

"ನೋಡು, ಪೇತ್ಕ, ಪಟ್ಟೆಕೋಳಿ ನನಗೋಸ್ಕರ ಬಣ್ಣಬಣ್ಣದ ಮೊಟ್ಟೆ ಇಟ್ಟಿದೆಯೋ ಇಲ್ವೋ ನೋಡೋಣಾಂತ ಬಂದೆ."

"ಅಲ್ಲಾ! ನೀನೆಂಥ ಅವಸರದೋಳು. ಪಟ್ಟೆಕೋಳಿ ದಿನಾಗ್ಲೂ ಇಡೋದು ಬಿಳೀ ಮೊಟ್ಟೆಗಳ್ನ. ಬಣ್ಣ ಬಣ್ಣದ್ದನ್ನು ಇಡೋದು ಬಲು ಅಪರೂಪ. ಮಲಗೋದು ಬಿಟ್ಟು ಇಲ್ಲಿಗೆ ಯಾಕೆ ಬಂದೆ," ಅಂತ ಪೇತ್ಕ ಮಾಷಳನ್ನು ಗದರಿಸಿತು.

"ನಂಗೆ ಮಲಗಕ್ಕೆ ಆಗ್ತಾ ಇಲ್ಲ" ಅಂದಳು ಮಾಷ.

"ಯಾಕೆ?"

"ನನ್ನ ಹಾಸಿಗೆಯ ಮೇಲೆ ನನಗೆ ಸಿಟ್ಟು ಬಂದಿದೆ. ಅದು ಹಿತವಾಗಿಲ್ಲ."

"ಹೌದು! ಇದ್ದರೂ ಇರಬಹುದು," ಎಂದು ಹುಂಜ ತನ್ನ ಸಮ್ಮತಿ ಸೂಚಿಸಿ, "ಹೋಗಲಿ, ಇಲ್ಲಿ ಬಾ. ಒಬ್ಬರಿಗೊಬ್ಬರು ಒತ್ತಿಕೊಂಡು, ರೆಕ್ಕೆಗಳನ್ನು ಹರಡಿಕೊಂಡು ಮಲಗಿದ್ರೆ ಎಷ್ಟು ಚೆನ್ನಾಗಿರುತ್ತೆ, ಗೊತ್ತಾ? ಹತ್ತಿ ಬಾ, ನಮ್ಮ ಚಪ್ಪರದ ಮೇಲಕ್ಕೆ. ಈ ಅಡ್ಡ ಕಂಬಿ ಮೇಲಕ್ಕೆ," ಎಂದಿತು.

ಮಾಷ ಅತಿ ಪ್ರಯಾಸದಿಂದ ಕಂಬಿಯ ಮೇಲಕ್ಕೆ ಹೋದಳು. ಕಾಲು ಮುದುರಿಕೊಂಡು, ಮುಖವನ್ನು ತನ್ನ ಕೈಗಳ ಮಧ್ಯೆ ಇಟ್ಟು ಕೂತಳು. ಒಂದು ಪಕ್ಕದಲ್ಲಿ ಹೆಣ್ಣು ಕೋಳಿ ಒರಗಿಕೊಂಡು ಕಾವು ಕೊಡ್ತಾ ಇದೆ. ಇನ್ನೊಂದು ಕಡೆ ಹುಂಜ. ನಿಜವಾಗಿಯೂ ಚೆನ್ನಾಗಿದೆ. ಅಲ್ಲದೆ ಬೆಚ್ಚಗಿದೆ. ಮಾಷ ಹಾಗೆ ಸ್ವಲ್ಪ ತೂಕಡಿಸಿದಳು. ಕಂಬಿಯ ಮೇಲಿನಿಂದ ತೊಪ್ಪನೆ ಕೆಳಕ್ಕೆ ಬಿದ್ದಳು.



"ನಿನ್ನ ಮಂಚ ಎಲ್ಲಿ?" ಮಾಷ ಕೇಳಿದಳು.

"ಹಾ! ಅದೇ ಇರೋದು! ನಾನು ಯಾವ ರೀತಿಯ ಮಂಚವೂ ಇಲ್ಲದೆ ಮಲಗ್ತೀನಿ. ಮೇಲ್ಛಾವಣಿ ತಲುಪೋದೇ ತಡ ಪಂಜಗಳಿಂದ ಈ ಮೊಳೆಗೆ ಕಚ್ಚಿಕೊಂಡು ತಲೆ ಕೆಳಗೆ ನೇತಾಡೋ ಹಾಗೆ ಮಾಡಿಕೊಂಡು ಬಿಡೋದಷ್ಟೆ. ಬಾ ಮೇಲಕ್ಕೆ, ನನ್ನ ಹತ್ತಿರ. ನಾನು ಜೋಲಾಡೋ ಮೊಳೆಯನ್ನ ಇವತ್ತು ನಿಂಗೆ ಬಿಟ್ಟು ಕೊಡ್ತೀನಿ," ಎಂದಿತು ಬಾವಲಿ.

ಮಾಷ ಆಗ ತಾನೆ ಕೋಳಿಗುಡಿಸಲಿನಲ್ಲಿ ಅಡ್ಡ ಕಂಬಿಯ ಮೇಲಿನಿಂದ ಬಿದ್ದದ್ದನ್ನು ಜ್ಞಾಪಿಸಿಕೊಂಡಳು. ತರಚಿದ್ದ ಮಂಡಿಯನ್ನು ಮತ್ತೊಮ್ಮೆ ಮುಟ್ಟಿ ನೋಡಿಕೊಂಡಳು.

"ಅಲ್ಲಾ! ನಾನಲ್ಲಿ ಹೇಗೆ ಮಲಗೋದು? ಅದೂ, ತಲೆ ಕೆಳಗೆ ಮಾಡಿಕೊಂಡು. ಬೇಡಪ್ಪಾ ಬಿದ್ ಬಿಡ್ತೀನಷ್ಟೆ. ಇದೆಲ್ಲಾ ಆಗೊಲ್ಲ. ಇಲ್ಲೂ ಏನೂ ಸುಖವಿಲ್ಲ...." ಅಂತ ಅಂದುಕೊಂಡಳು.

"ಎಲ್ಲಿದೀಯ? ಬಾ, ನನ್ನ ಹತ್ತಿರ," ಅಂತ ಬಾವಲಿ ಕೂಗಿ ಕರೆಯಿತು.

ಮಾಷ ಬಾವಲಿಯ ಕೂಗಿಗೆ ಉತ್ತರಿಸದೆ ಅಲುಗಾಡುತ್ತಿದ್ದ ಮೆಟ್ಟಲಿನ ಮೇಲೆ ಮೆಲ್ಲಗೆ ಇಳಿದಳು. ಬೇಲಿ ಸಂದಿಯಲ್ಲಿ ನುಗ್ಗಿ ತೋಟದಿಂದ ಹೊರಬಂದು ಕೊಳದ ಕಡೆಗೆ ನಡೆದಳು. ಕಪ್ಪೆಗಳು ಅವಳ ಹೆಜ್ಜೆಗಳ ಸಪ್ಪಳ ಕೇಳಿ ಹೆದರಿ ವಟಗುಟ್ಟುವುದನ್ನು ನಿಲ್ಲಿಸಿ ಬುಳುಂ ಅಂತ ನೀರಿನೊಳಕ್ಕೆ ಧುಮುಕಿದವು. ಮುದಿ ಬಕಪಕ್ಷಿ ಬೆದರಿ ರೆಕ್ಕೆ ಬಡಿಯಿತು. ಆಮೇಲೆ ಮಾಷಳನ್ನು ನೋಡಿ ಸುಮ್ಮನಾಯಿತು.



ಅವಳು ಎದ್ದು ಕೋಳಿಗುಡಿಸಲಿನಿಂದ ಓಟ ಕಿತ್ತಳು. ಬಂದು ಮನೆ ಹೊಸ್ತಿಲ ಮೇಲೆ ಕುಳಿತುಕೊಂಡಳು. ಕಣ್ಣು ಮಿಟುಕಿಸುವುದರೊಳಗಾಗಿ ಅವಳ ಮುಂದೆ ಎಂಥದೋ ಹಕ್ಕಿ ಹಾರಿಬಂದು ಸೀದಾ ಅವಳ ಮಂಡಿಯ ಮೇಲೆ ಕುಳಿತುಕೊಂಡಿತು. ಮಾಷ ಅದರ ಕಡೆಗೆ ನೋಡ್ತಾಳೆ. ಅದೆಂಥದೋ ವಿಚಿತ್ರ ಹಕ್ಕಿ.

"ನಮಸ್ಕಾರ. ಯಾರು ನೀನು?" ಎಂದಳು ಮಾಷ.

"ನಾನು ಬಾವಲಿ. ಹಗಲು ಹೊತ್ತು ನಿಮ್ಮನೆಯ ಮೇಲಟ್ಟದಲ್ಲಿ ಮಲಗ್ತೀನಿ. ರಾತ್ರಿ ಹೊತ್ತು ಹಾರಾಡ್ತೀನಿ. ಅದಿರ್ಲಿ, ನೀನ್ಯಾಕೆ ಇನ್ನೂ ಮಲಗಿಲ್ಲ?" ಎಂದು ಕೇಳಿತು ಬಾವಲಿ.

"ನನ್ನ ಹಾಸಿಗೆ ಚೆನ್ನಾಗಿಲ್ಲ."

"ಹೌದಾ! ನಿನ್ನ ನೋಡಿದರೆ ನಿಜವಾಗಿಯೂ ನನಗೆ ಅಯ್ಯೋ ಅನಿಸುತ್ತೆ." ಹೀಗೆಂದು ಬಾವಲಿ ನಿಟ್ಟುಸಿರು ಬಿಟ್ಟಿತು. "ನಿನಗೆ ಇಷ್ಟವಾದರೆ ನಾನು ನಿನಗೆ ಸಹಾಯ ಮಾಡ್ತೀನಿ."

"ಓ! ಆಗಲಿ. ಮಾಡು."

"ಹಾಗಾದ್ರೆ, ನನ್ನ ಜೊತೇಲಿ ಮೇಲಟ್ಟಕ್ಕೆ ಬಾ."

ಬಾವಲಿ ತನ್ನ ರೆಕ್ಕೆ ಬಡಿದುಕೊಂಡು ಮನೆ ಚಾವಣಿಯ ಕಿಟಕಿಯ ಕಡೆಗೆ ಹಾರಿತು. ಮಾಷ ಒರಟಾದ ಮರದ ಮೆಟ್ಟಲು ಹತ್ತಿಕೊಂಡು ಮೇಲಟ್ಟಕ್ಕೆ ಹೋದಳು.

"ಇದು ನಾನು ಮಲಗುವ ಕೋಣೆ," ಎಂದಿತು ಬಾವಲಿ.

"ಇದೇನು? ಹೀಗೆ ಅಲೀತಿದ್ದೀಯ? ನನ್ನ ಪಾಲಿನ ಕಪ್ಪೆಗಳನ್ನೆಲ್ಲಾ ಹೆದರಿಸಿಬಿಟ್ಟೆಯಲ್ಲಾ?" ಎಂದಿತು ಬಕಪಕ್ಷಿ.

"ನಂಗೆ ಮಲಗೋಕೆ ಇಷ್ಟವಿಲ್ಲ," ಅಂದಳು ಮಾಷ.

"ಹ, ಹ, ಹ!" ಅಂತ ಚಳಿ ಬಂದವರ ಹಾಗೆ ಬಕಪಕ್ಷಿ ಕೆಮ್ಮಿತು. "ನಾನಂದುಕೊಂಡಿದ್ದೆ, ನಾನೋ ಮುದುಕಿ. ವಯಸ್ಸಾಯಿತು ನಂಗೆ. ಕೈಕಾಲೆಲ್ಲಾ ಹಿಡ್ಕೊಂಡು ನನಗೆ ಮಾತ್ರ ನಿದ್ರೆ ಬರೋಲ್ಲ ಅಂತ ತಿಳ್ದಿದ್ದೆ. ಅಲ್ಲಾ, ನಿಂಗೇನಾಗಿದೆ? ನಿಂಗೇನು ಧಾಡಿ?" ಅಂದಿತು.

"ನಂಗೇನಾಗಿಲ್ಲ," ಮಾಷ ತಬ್ಬಿಬ್ಬಾಗಿ ಹೇಳಿದಳು. "ಪ್ರತೀ ದಿನ ಮಲಗಿ ಮಲಗಿ ಬೇಜಾರಾಗಿದೆ ಅಷ್ಟೆ," ಅಂದಳು.

"ನಿಜ. ನಿಜ. ಬೇಸರವೇನೋ ಆಗುತ್ತೆ. ನಾನು ನನ್ನ ಸ್ವಂತ ಅನುಭವದಿಂದ ಹೇಳ್ತಾ ಇದೀನಿ, ಕೇಳು. ನೀನೂ ಈ ಜೊಂಡಿನೊಳಕ್ಕೆ ಇಳಿದು ಬಾ. ನಾವಿಬ್ರೂ ಸ್ನೇಹಿತರಾಗೋಣ. ನಾನು ನಿನಗೆ ತಿನ್ನೋಕೆ ಕಪ್ಪೇಮರಿ ಕೊಡ್ತೀನಿ. ಆಮೇಲೆ ಮೆತುವಾದ ಮಣ್ಣಿನಲ್ಲಿ ಪಕ್ಕಪಕ್ಕದಲ್ಲಿ ಒಂಟಿ ಕಾಲಿನಲ್ಲಿ ನಿಲ್ಲೋಣ. ನಾನು ನನ್ನ ರೆಕ್ಕೆ ನಿನಗೆ ಹೊದಿಸ್ತೇನೆ," ಅಂದಿತು ಬಕಪಕ್ಷಿ.



"ನಂಗೆ ಕಪ್ಪೆ ಕಂಡ್ರೆ ಹೆದರಿಕೆ", ಮಾಷ ಅಳುವ ಸ್ವರದಲ್ಲಿ ಹೇಳಿದಳು. "ಅಲ್ಲದೆ ಕೆಸರು, ರಾಡಿನೀರು! ಇಲ್ಲಪ್ಪಾ, ನಾನು ನಿನ್ನ ಮನೇಲಿ ಮಲಗೋಲ್ಲ," ಅಂದಳು ಮಾಷ.

"ಅಯ್ಯೋ! ನೀನೆಂಥ ಅಳುಮೋರೆ," ಅಂದು ಬಕಪಕ್ಷಿ ಮಾಷಳ ಮೇಲೆ ಕೋಪಿಸಿಕೊಂಡಿತು. "ಹೊರಡಿಲ್ಲಿಂದ, ಹುಂ, ಬೇಗನೆ! ನೀನಿಲ್ದೇನೆ ನನಗಿಲ್ಲಿ ತೇವ ಬೇಕಾದಷ್ಟಿದೆ," ಎಂದು ಕಿರುಚಿತು.

ಮಾಷ ಸಪ್ಪೆ ಮುಖ ಹಾಕಿಕೊಂಡು ಹಿಂತಿರುಗಿದಳು.

"ಅಬ್ಬಬ್ಬಾ! ಕಪ್ಪೆಗಳಿರುವ ಆ ಕೊಳದಲ್ಲಿ ಮಲಗೋದು ಹೇಗಪ್ಪ? ತೇವ. ಚಳಿ ಬೇರೆ," ಅಂತ ಮಾಷ ಮನಸ್ಸಿನಲ್ಲಿಯೇ ಮರುಗಿದಳು. "ಈಗಲೇ ಹೋಗಿ ಹಾಸಿಗೆಯ ಮೇಲೆ ಮಲಗಿ, ಬೆಚ್ಚಗಿರೋ ಕಂಬಳಿ ಹೊದ್ದುಕೊಂಡರೆ ಹೇಗಿರುತ್ತೆ!... ಕಂಬಳಿಯೇನೂ ಕಚ್ಚೊಲ್ಲ. ಅದು ಇನ್ನೂ ಒಳ್ಳೇದಲ್ವೆ. ಜತೆಗೆ ಮೆತ್ತಗಿರೊ ದಿಂಬು."



ಹೀಗೆನ್ನುತ್ತಾ ಮಾಷ ಮನೆಗೆ ಹಿಂತಿರುಗಿದಳು.

ಮೆಟ್ಟಿಂಗಾಲಿನಲ್ಲಿ ಮೆಲ್ಲನೆ ಹೆಜ್ಜೆ ಇಡುತ್ತಾ ಅವಳು ತನ್ನ ಮಲಗುವ ಕೋಣೆಗೆ ಹೋದಳು. ನೆಲದ ಮೇಲೆ ಬಿದ್ದಿದ್ದ ಕಂಬಳಿಯನ್ನು ಎತ್ತಿ ದಿಂಬನ್ನು ಅದರ ಜಾಗದಲ್ಲಿರಿಸಿ, ತನ್ನ ಮೆತ್ತನೆಯ ಹಾಸಿಗೆಯಲ್ಲಿ ಹಾಯಂತ ಮಲಗಿ ಕಾಲು ನೀಡಿದಳು.

ಹಾಗೆಯೇ ಆಕಳಿಸುತ್ತಾ, "ನನ್ನ ಹಾಸಿಗೆಯಂಥಾ ಹಾಸಿಗೆ ಈ ಪ್ರಪಂಚದಲ್ಲೇ ಯಾರ ಹತ್ರಾನೂ ಇಲ್ಲ," ಅಂದಳು ಮಾಷ.



ಚಿತ್ರಗಳು: ಬರೀಸ್ ಮರ್ಕೇವಿಚ್

ಅನುವಾದ: ಉಮಾಪತಿ

ರಾದುಗ ಪ್ರಕಾಶನ

ಮಾಸ್ಕೋ, ಯುಎಸ್ಎಸ್ಆರ್



Г. Лебедева

КАК МАША ПОССОРИЛАСЬ С ПОДУШКОЙ

*На языке каннада*

**Galina Lebedeva.**

MASHA'S AWFUL PILLOW

***In Kannada***

Перевод сделан по книге:
Г. Лебедева «Как Маша поссорилась с подушкой»
М. «Детская литература», 1968

ಸೋವಿಯತ್ ಒಕ್ಕೂಟದಲ್ಲಿ ಮುದ್ರಿತವಾಗಿದೆ

Л $\frac{70801-038}{031(01)-82}$ 289—83

4803010102